ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ವೃದ್ಧಾಶ್ರಮ, ಅನಾಥಾಶ್ರಮ ಮತ್ತು ಮಕ್ಕಳ ಸಹಾಯವಾಣಿ ಬಗ್ಗೆ

ಶ್ರೀ ಎಂ. ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

059 (327) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಹಾಸನದಲ್ಲಿರುವ ವೃದ್ಧಾಶ್ರಮ, ಅನಾಥ ಮಕ್ಕಳ ಆಶ್ರಮ ಮತ್ತು ಮಕ್ಕಳ ಸಹಾಯವಾಣಿ ಕೇಂದ್ರಗಳೆಷ್ಟು ; ಇಲ್ಲಿ ಎಷ್ಟು ಜನರನ್ನು ಪೋಷಿಸಲಾಗುತ್ತಿದೆ; ಇಲ್ಲಿರುವ ಸೌಲಭ್ಯಗಳೇನು ; (ಕೇಂದ್ರವಾರು ಮಾಹಿತಿ ನೀಡುವುದು)

(ಆ) ಹಾಸನದಲ್ಲಿ ನಡೆಯುತ್ತಿರುವ ವೃದ್ಧಾಶ್ರಮ, ಅನಾಥ ಮಕ್ಕಳ ಆಶ್ರಮ ಮತ್ತು ಮಕ್ಕಳ ಸಹಾಯವಾಣಿ ಕೇಂದ್ರಗಳಲ್ಲಿ ಯಾವ ಯಾವ ಸಂಸ್ಥೆಗಳು ಯಾವ ಯಾವ ಸೇವೆಗಳನ್ನು ಎಷ್ಟು ವರ್ಷಗಳಿಂದ ಮಾಡುತ್ತಿವೆ ; ಅವುಗಳು ಯಾವ ಹಂತದಲ್ಲಿವೆ ;

(ಇ) ಸರ್ಕಾರದಿಂದ ಅವುಗಳಿಗೆ ಎಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ ಹಾಗೂ ಎಷ್ಟು ವರ್ಷಗಳಿಂದ ಬಿಡುಗಡೆ ಮಾಡಲಾಗುತ್ತಿದೆ ?